ಕರ್ನಾಟಕ ವಿಧಾನ ಪರಿಷತ್

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1337
2. ಸದಸ್ಯರ ಹೆಸರು : ಶ್ರೀ ಕೆ.ಟಿ. ಶ್ರೀಕಂಠೇಗೌಡ, (ಪದವೀಧರರ ಕ್ಷೇತ್ರ)

3. ಉತ್ತರಿಸುವ ದಿನಾಂಕ : 24.12.2021
4. ಉತ್ತರಿಸುವವರು : ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

**ವಿಷಯ: ಸಹಾಯಕ ನಿರ್ದೇಶಕರ ಹುದ್ದೆಗೆ ಬಡ್ತಿ ನೀಡುವ ಬಗ್ಗೆ.**

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದ ತಾಲ್ಲೂಕು ಪಂಚಾಯತ್‌ಗಳಲ್ಲಿ ಮಂಜೂರಾದ ಸಹಾಯಕ ನಿರ್ದೇಶಕ ಹುದ್ದೆಗಳೆಷ್ಟು; | ಸಹಾಯಕ ನಿರ್ದೇಶಕ (ಗ್ರಾಮೀಣ ಉದ್ಯೋಗ)- 226 ಮಂಜೂರಾದ ಹುದ್ದೆಗಳು.<br>ಸಹಾಯಕ ನಿರ್ದೇಶಕ (ಪಂಚಾಯತ್ ರಾಜ್)- 226 ಮಂಜೂರಾದ ಹುದ್ದೆಗಳು |
| ಆ | ಇದರಲ್ಲಿ ಖಾಲಿ ಇರುವ ಹುದ್ದೆಗಳೆಷ್ಟು; (ವಿವರ ನೀಡುವುದು) | ಸಹಾಯಕ ನಿರ್ದೇಶಕ (ಗ್ರಾಮೀಣ ಉದ್ಯೋಗ)- ಖಾಲಿ ಹುದ್ದೆಗಳ ಸಂಖ್ಯೆ: 125<br>ಸಹಾಯಕ ನಿರ್ದೇಶಕ (ಪಂಚಾಯತ್ ರಾಜ್)- ಖಾಲಿ ಹುದ್ದೆಗಳ ಸಂಖ್ಯೆ: 191 |
| ಇ | ಸಹಾಯಕ ನಿರ್ದೇಶಕರ ಹುದ್ದೆಗಳನ್ನು ಭರ್ತಿ ಮಾಡಲು ಇರುವ ನಿಯಮಗಳೇನು; (ವಿವರ ನೀಡುವುದು) | ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಪಂಚಾಯತ್ ಅಭಿವೃದ್ಧಿ ಅಧಿಕಾರಿ ವೃಂದದಲ್ಲಿ ಅಥವಾ ಪಂಚಾಯತ್ ವಿಸ್ತರಣಾಧಿಕಾರಿ (2010 ರ ಪೂರ್ವದಲ್ಲಿ ಅಸ್ತಿತ್ವದಲ್ಲಿದ್ದ ಹುದ್ದೆಗಳು) ವೃಂದದಲ್ಲಿ ಅಥವಾ ಈ ಎರಡೂ ವೃಂದಗಳು ಸೇರಿದಂತೆ ಒಟ್ಟಾರೆ 5 ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರಬೇಕು. ಪರಂತು 5 ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವ ಅರ್ಹ ವ್ಯಕ್ತಿಗಳು ಲಭ್ಯವಿಲ್ಲದಿದ್ದ ಪಕ್ಷದಲ್ಲಿ 3 ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವ ವ್ಯಕ್ತಿಗಳನ್ನು ಸಹಾಯಕ ನಿರ್ದೇಶಕ ಹುದ್ದೆಗೆ ಶೇ 100% ರಷ್ಟು ಮುಂಬಡ್ತಿಯಿಂದ ಪರಿಗಣಿಸಲು ಅವಕಾಶ ಇರುತ್ತದೆ. ಮುಂದುವರೆದು, ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುವುದು, ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇಲ್ಲದಿರುವುದು, ಯಾವುದೇ ಇಲಾಖಾ ವಿಚಾರಣೆ/ನ್ಯಾಯಾಂಗ ನಡವಳಿ ಬಾಕಿಯಿಲ್ಲದಿರುವುದು. ಮುಂಬಡ್ತಿಗೆ ಲಭ್ಯವಿರುವ ಖಾಲಿ ಹುದ್ದೆಗಳ ಎದುರಿಗೆ |

| | | |
| --- | --- | --- |
| | | ಜೇಷ್ಠತಾ ಪಟ್ಟಿಯನುಸಾರ ಹಿರಿತನ ಹೊಂದಿರುವ ಅಭ್ಯರ್ಥಿಗಳನ್ನು ಪರಿಗಣಿಸಲು ಅವಕಾಶ ಇರುತ್ತದೆ. |
| ಈ | ಪಂಚಾಯತ್ ಅಭಿವೃದ್ಧಿ ಅಧಿಕಾರಿ ಹುದ್ದೆಯಿಂದ ಸಹಾಯಕ ನಿರ್ದೇಶಕರ ಹುದ್ದೆಗೆ ಬಡ್ತಿ ನೀಡುವ ಪ್ರಸ್ತಾವನೆಯು ವಿಳಂಬವಾಗುತ್ತಿರುವುದಕ್ಕೆ ಕಾರಣವೇನು; (ವಿವರ ನೀಡುವುದು). | ಪಂಚಾಯತ್ ಅಭಿವೃದ್ಧಿ ಅಧಿಕಾರಿ ವೃಂದದ ಜೇಷ್ಠತಾ ಪಟ್ಟಿ ದಿನಾಂಕ:21.02.2014 ಹಾಗೂ ದಿನಾಂಕ:28.12.2017 ಗಳನ್ನು ಮಾನ್ಯ ಕೆ.ಎ.ಟಿಯು ಅರ್ಜಿ ಸಂಖ್ಯೆ:2259-2261/2014 ಹಾಗೂ ತತ್ಸಬಂಧಿತ ಅರ್ಜಿಗಳಲ್ಲಿ ದಿನಾಂಕ:18.3.2019 ರಂದು ನೀಡಿರುವ ತೀರ್ಪಿನಲ್ಲಿ ರದ್ದುಪಡಿಸಿರುತ್ತದೆ. ಮಾನ್ಯ ಕೆ.ಎ.ಟಿಯ ಆದೇಶವನ್ನು ಪ್ರಶ್ನಿಸಿ ಬಾಧಿತರು ಹಾಗೂ ಸರ್ಕಾರವು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ವಿವಿಧ ರಿಟ್ ಅರ್ಜಿಗಳನ್ನು ಸಲ್ಲಿಸಿದ್ದು, ರಿಟ್ ಅರ್ಜಿ ಸಂಖ್ಯೆ: 201903-201906/2019, 26196-26207/19 ಮತ್ತು 33613/2019 ರ ಪ್ರಕರಣಗಳಲ್ಲಿ ನೀಡಿರುವ ಮಧ್ಯಂತರ ಆದೇಶಗಳ ಕಾರಣಗಳಿಂದ ಪ್ರಶ್ನಿತ ಜೇಷ್ಠತಾ ಪಟ್ಟಿಯನ್ನು ಆಧರಿಸಿ, ಮಿಕ್ಕುಳಿದ ಮಾತ್ರ ವೃಂದಕ್ಕೆ ಸೇರಿದ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳಿಗೆ ಸಹಾಯಕ ನಿರ್ದೇಶಕ (ಗ್ರಾಉ)/(ಪಂ.ರಾ) ಮುಂಬಡ್ತಿ ನೀಡಲು ಸಾಧ್ಯವಾಗಿರುವುದಿಲ್ಲ. ಆದ್ದಾಗ್ಯೂ, ಖಾಲಿ ಇರುವ ಹುದ್ದೆಗಳ ಎದುರು ಅರ್ಹ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ-32 ರಡಿ ಸ್ವತಂತ್ರ ಪ್ರಭಾರದಲ್ಲಿರಿಸುವ ಬಗ್ಗೆ ಅನುಮತಿ ಕೋರಿ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಲಾದ ಮಧ್ಯಂತರ ಅರ್ಜಿಗಳು (03/2020 -ರಿ.ಅ.ಸಂ.33613/2019 ಮತ್ತು 01/2020- ರಿ.ಅ.ಸಂ.201903-906/2019) ದಿನಾಂಕ:09.7.2020 ವಜಾಗೊಂಡಿರುತ್ತವೆ.<br><br>ಮಧ್ಯಂತರ ಅರ್ಜಿಗಳಲ್ಲಿನ ಆದೇಶದ ಕುರಿತು ಸಲ್ಲಿಸಲಾದ ಪುನರ್ ಪರಿಶೀಲನಾ ಅರ್ಜಿ ಹಾಗೂ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಸಲ್ಲಿಸಲಾದ ಎಸ್.ಎಲ್.ಪಿ ಸಂಖ್ಯೆ:017936/2021 ಗಳು ಪುರಸ್ಕೃತ ಗೊಂಡಿರುವುದಿಲ್ಲ. ಈ ಕಾರಣದಿಂದ ಮಿಕ್ಕುಳಿದ ಮೂಲ ವೃಂದದ |

| | | |
|---|---|---|
| | | ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳಿಗೆ ಸಹಾಯಕ ನಿರ್ದೇಶಕ (ಗ್ರಾ.ಉ) ಹುದ್ದೆಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 32ರ ಅನುಸಾರ ಸ್ವತಂತ್ರ ಪ್ರಭಾರದಲ್ಲಿರಿಸಲು ಸಾಧ್ಯವಾಗಿರುವುದಿಲ್ಲ. |
| ಉ | ಶೀಘ್ರವಾಗಿ ಪಿ.ಡಿ.ಓ. ಹುದ್ದೆಯಿಂದ ಸಹಾಯಕ ನಿರ್ದೇಶಕರ ಹುದ್ದೆಗೆ ಬಡ್ತಿ ನೀಡಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ಒದಗಿಸುವುದು) | ರಿಟ್ ಅರ್ಜಿ ಸಂಖ್ಯೆ: 201903-201906/2019, 26196-26207/19 33613/2019 ಹಾಗೂ ತತ್ಸಂಬಂಧಿತ ಅರ್ಜಿಗಳನ್ನು ಇತ್ಯರ್ಥಪಡಿಸುವ ಬಗ್ಗೆ ಹಿಂಬಾಲಿಕ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. |

ಗ್ರಾಅಪ 259 ಕೆ.ಎಸ್.ಎಸ್ 21(ಇ)

(ಕೆ.ಎಸ್.ಈಶ್ವರಪ್ಪ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್

ಸಚಿವರು